

# Voice of Jagadguru

advaitam paramanandam



an e-magazine on advaita




## ಜಗದ್ಗುರು ವಾಣಿ

(An Unit of the e magazine Voice of Jagadguru)

## ಅನುಗ್ರಹ ಭಾಷಣ

### ಎಲ್ಲಾ ಕರ್ಮಗಳನ್ನು ದೇವರಿಗೆ ಅರ್ಪಿಸಿ

ಎಲ್ಲಾ ಮಾನವರು ಅಂತಿಮವಾಗಿ ಮೋಕ್ಷವನ್ನು ಪಡೆಯಲು ಬಯಸುತ್ತಾರೆ. ಅದಕ್ಕಾಗಿ ಶಾಸ್ತ್ರಗಳು ಅನೇಕ ಸಾಧನಗಳನ್ನು ವಿಧಿಸಿವೆ. ಅವುಗಳೆಂದರೆ: ವಿವೇಕ ಅಥವಾ ಶಾಶ್ವತ ಮತ್ತು ಅಶಾಶ್ವತವಾದುದು ಯಾವುದು ಎಂದು ತಿಳಿದುಕೊಳ್ಳುವಿಕೆ, ವೈರಾಗ್ಯ ಅಥವಾ ಅನಿತ್ಯವಾದುದರ ಕಡೆಗೆ ನಿರ್ಲಿಪ್ತತೆ, ಮನಸ್ಸಿನ ನಿಯಂತ್ರಣ, ಧ್ಯಾನ ಇತ್ಯಾದಿ.



ಇವುಗಳಲ್ಲಿ ಮನಸ್ಸಿನ ನಿಯಂತ್ರಣವು ಒಂದು ಪ್ರಮುಖ ಸಾಧನವಾಗಿದೆ. ಕೆಲವರಿಗೆ ಮನಸ್ಸಿನ ನಿಯಂತ್ರಣವನ್ನು ತ್ವರಿತವಾಗಿ ಸಾಧಿಸಲು ಸಾಧ್ಯವಾಗುತ್ತದೆ. ಹೆಚ್ಚಿನವರು ತುಂಬಾ ಕಷ್ಟಪಡುತ್ತಾರೆ. ಅವರು ಭಗವದ್ ಧ್ಯಾನಕ್ಕೆ ಕುಳಿತಾಗ ಅವರ ಮನಸ್ಸು ಚಂಚಲವಾಗುತ್ತದೆ. ಭಗವದ್ಗೀತೆಯಲ್ಲಿ ಭಗವಾನ್ ಕೃಷ್ಣನು ಜನರನ್ನು ಇದಕ್ಕಾಗಿ ಚಿಂತಿಸದೆ ನಿರಂತರ ಅಭ್ಯಾಸದಿಂದ ಅದನ್ನು ಸಾಧಿದಬಹುದು ಎಂದು ಉಪದೇಶಿಸುತ್ತಾನೆ ಮತ್ತು ಆ ಸಾಧನೆಯ ಕಡೆಗೆ ಅವರನ್ನು ಉತ್ತೇಜಿಸುತ್ತಾನೆ:

(ಜಗದ್ಗುರು ಶಂಕರಾಚಾರ್ಯರು ಪರಮಪೂಜ್ಯ ಜೇಷ್ಠ ಮಹಾಸನ್ನಿಧಾನಂ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮೀಜಿ ಮತ್ತು ಜಗದ್ಗುರು ಶಂಕರಾಚಾರ್ಯರು ಪರಮಪೂಜ್ಯ ಮಹಾಸನ್ನಿಧಾನಂ ಶ್ರೀ ಬಾರೀ ತಾಮೀಶ್ರತಿ)

अथ चित्तं समाधातुं न शक्नोषि मयि स्थिरम् | अभ्यासयोगेन ततो मामिच्छाप्तुं धनञ्जय ||

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ | ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಞ್ಜಯ ||

ಇದರ ತಾತ್ಪರ್ಯವೇನೆಂದರೆ, ನಿಮ್ಮ ಮನಸ್ಸನ್ನು ದೇವರ ಮೇಲೆ ಇರಿಸಲು ನಿಮಗೆ ಸಾಧ್ಯವಾಗದಿದ್ದರೆ, ಮತ್ತೆ ಮತ್ತೆ ಪ್ರಯತ್ನಿಸಿ. ಕೆಲವರಿಗೆ ಆ ವ್ಯಾಯಾಮ ಕೂಡ ತುಂಬಾ ಕಷ್ಟಕರವಾಗಿರುತ್ತದೆ ಏಕೆಂದರೆ ಮನಸ್ಸು ಎಲ್ಲ ರೀತಿಯಲ್ಲಿಯೂ ಅಲೆದಾಡಬಹುದು. ಈ ಸಮಸ್ಯೆಯಿಂದ ಬಳಲುತ್ತಿರುವವರಿಗೆ, ಭಗವಂತಾನು ಗೀತೆಯಲ್ಲಿ ಮತ್ತೊಮ್ಮೆ ಸಲಹೆ ನೀಡುತ್ತಾನೆ:

अभ्यासेऽप्यसमर्थोऽसि मत्कर्मपरमो भव | मदर्थमपि कर्माणि कुर्वन् सिद्धिमवाप्स्यसि ||

ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ | ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ||

ಅದೇನೆಂದರೆ: "ಪುನರಾವರ್ತಿತ ಪ್ರಯತ್ನಗಳ ಹೊರತಾಗಿಯೂ, ಮನಸ್ಸು ನಿಯಂತ್ರಣಗೊಳ್ಳದಿದ್ದರೆ, ಸದಾ ಕಾಲದಲ್ಲಿಯೂ ದೇವರನ್ನು ಸ್ಮರಿಸಿ ಮತ್ತು ನಿಮ್ಮ ಎಲ್ಲಾ ಕರ್ಮಗಳನ್ನು (ಚಟುವಟಿಕೆಗಳನ್ನು) ಅವನಿಗೆ ಅರ್ಪಿಸಿ. ಅದರಿಂದ ನೀವು ಚಿತ್ತ ಶುದ್ಧಿಯನ್ನು (ಮನಸ್ಸಿನ ಶುದ್ಧೀಕರಣ) ಪಡೆಯುತ್ತೀರಿ.

ಯಾವಾಗಲೂ ದೇವರ ಬಗ್ಗೆಯೇ ಯೋಚಿಸುವ ಮತ್ತು ತನ್ನ ಎಲ್ಲಾ ಕಾರ್ಯಗಳನ್ನು ಅವನಿಗೆ ಅರ್ಪಿಸುವವನು, ಯಾವಾಗಲೂ ತೃಪ್ತಿ ಮತ್ತು ಸಂತೋಷದಿಂದ ಇರುತ್ತಾನೆ. ಅವನ ಮನಸ್ಸು ಪ್ರಶಾಂತವಾಗಿರುತ್ತದೆ. ಗುರುವಿನ ಕೃಪೆಯಿಂದ ಹಂತ ಹಂತವಾಗಿ ಮುನ್ನಡೆದು ಮೋಕ್ಷ ಪ್ರಾಪ್ಯನ್ನುಹೊಂದುತ್ತಾನೆ.

ಈ ತತ್ವವನ್ನು ಅರ್ಥಮಾಡಿಕೊಳ್ಳಲು ಮತ್ತು ಅದನ್ನು ಆಚರಣೆಗೆ ತರಲು ನಾವು ಎಲ್ಲರಿಗೂ ಆಶೀರ್ವದಿಸುತ್ತೇವೆ.

ಜಗದ್ಗುರು ಶಂಕರಾಚಾರ್ಯ ಪರಮ ಪೂಜ್ಯ ಮಹಾಸನ್ನಿಧಾನಂ ಶ್ರೀ ಭಾರತೀ ತೀರ್ಥ ಮಹಾಸ್ವಾಮೀಜಿ

## ಜಗದ್ಗುರು ವಾಣಿ

(An Unit of the e magazine Voice of Jagadguru)

# ||ಆತ್ಮಸಾಕ್ಷಾತ್ಕಾರ:||

## ||ಆತ್ಮಬೋಧ:||




एवं निरन्तरकृता ब्रह्मैवास्मीति वासना ।
हरत्यविद्याविक्षेपान् रोगानिव रसायनम् ॥ ३७॥

ಏವಂ ನಿರಂತರಕೃತಾ ಬ್ರಹ್ಮೈವಾಸ್ಮೀತಿ ವಾಸನಾ |
ಹರತ್ಯವಿದ್ಯಾವಿಕ್ಷೇಪಾನ್ ರೋಗಾನಿವ ರಸಾಯನಮ್ || **37**||

ಔಷಧವು ಅಥವಾ ರಸಾಯನವು ರೋಗವನ್ನು ಗುಣಪಡಿಸುವಂತೆ, ನಿರಂತರ ಅಭ್ಯಾಸದಿಂದ ಉಂಟಾಗುವ "ನಾನು ಬ್ರಹ್ಮನ್" ಎಂಬ ಅನಿಸಿಕೆಯು ಅಜ್ಞಾನವನ್ನು ಮತ್ತು ಅದರಿಂದ ಉಂಟಾಗುವ ತಳಮಳವನ್ನು ನಾಶಪಡಿಸುತ್ತದೆ, .

(ಸೆಪ್ಟೆಂಬರ್ 19, 2024 ಶೃಂಗೇರಿಯಲ್ಲಿ ಸೆಪ್ಟೆಂಬರ್ 7, 2024 ರಂದು ಪ್ರಾರಂಭವಾದ ವಾರ್ಷಿಕ ಮಹಾಗಣಪತಿ ವಾಕ್ಯಾರ್ಥ ವಿದ್ವತ್ ಸಭೆಯು ಸೆಪ್ಟೆಂಬರ್ 19 ರಂದು ರಾತ್ರಿ 8:00 ಗಂಟೆಗೆ ಮುಕ್ತಾಯವಾಯಿತು)

विविक्तदेश आसीनो विरागो विजितेन्द्रियः ।
भावयेदेकमात्मानं तमनन्तमनन्यधीः ॥ ३८॥

ವಿವಿಕ್ತದೇಶ ಆಸೀನೋ ವಿರಾಗೋ ವಿಜಿತೇಂದ್ರಿಯಃ |
ಭಾವಯೇದೇಕಮಾತ್ಮಾನಂ ತಮನಂತಮನನ್ಯಧೀಃ || **38**||

ಏಕಾಂತ ಸ್ಥಳದಲ್ಲಿ ಕುಳಿತುಕೊಂಡು, ಮನಸ್ಸನ್ನು ಬಯಕೆಗಳಿಂದ ಮುಕ್ತಗೊಳಿಸಿ ಮತ್ತು ಇಂದ್ರಿಯಗಳನ್ನು ನಿಯಂತ್ರಿಸಿ, ಒಂದು ಕ್ಷಣವು ವಿಚಲಿತವಾಗದೆ ಏಕಾಮೇವಾದ್ವಿತೀಯವಾದ ಆತ್ಮನನ್ನು ಧ್ಯಾನಿಸಬೇಕು.

(ಮುಂದುವರಿಯುತ್ತದೆ....)

# ಜಗದ್ಗುರು ವಾಣಿ

(An Unit of the e magazine Voice of Jagadguru)

## ಸಜ್ಜನರ ಸಹವಾಸ

### ಅಧ್ಯಕ್ಷರ ನೇಮಕಾತಿ

अराजके हि लोकेऽस्मिन् सर्वतो विद्रुते भयात् .
रक्षार्थमस्य सर्वस्य राजानमसृजत् प्रभुः ..
*(राष्ट्राध्यक्ष (महत्त्व) मनु / 7 /3)*
ಅರಾಜಕೇ ಹಿ ಲೋಕೇऽಸ್ಮಿನ್ ಸರ್ವತೋ ವಿದ್ರುತೇ ಭಯಾತ್ .
ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ ಪ್ರಭುಃ ..
(ರಾಷ್ಟ್ರಾಧ್ಯಕ್ಷ (ಮಹತ್ತ್ವ) ಮನು / 7 /3)

ಈ ಪ್ರಪಂಚದಲ್ಲಿ ಯಾವುದೇ ನಿಯಮವಿಲ್ಲದಿದ್ದಾಗ ಎಲ್ಲರೂ ಒಬ್ಬರಿಗೊಬ್ಬರು ಹೆದರಿ ಅಲ್ಲಿ ಇಲ್ಲಿ ಓಡುತ್ತಿದ್ದರು. ಇಂತಹ ಸ್ಥಿತಿಯಲ್ಲಿ ದೇವರು ಸಾರ್ವಜನಿಕರ ರಕ್ಷಣೆಗೆ ಅಧ್ಯಕ್ಷರನ್ನು ನೇಮಿಸಿದರು.




### ಖಂಡನೀಯನಾದ ಆಡಳಿತಗಾರ.

वरं विषादनं राज्ञो
वरमग्नौ प्रवेशनं .
अनाथानं प्रपन्नानां
कृपाणामरक्षणात् ||
*(निंदनीय शासक स्क. पु., ब्र. ख./१७/२१)*
ವರಂ ವಿಷಾದನಂ ರಾಜ್ಞೋ
ವರಮಗ್ನೌ ಪ್ರವೇಶನಂ .
ಅನಾಥಾನಂ ಪ್ರಪನ್ನಾನಾಂ
ಕೃಪಾಣಾಮರಕ್ಷಣಾತ್ ||
(ನಿಂದನೀಯ ಶಾಸಕ ಸ್ಕ. ಪು., ಬ್ರ. ಖ./೧೭/೨೧)

ಯಾರು ತನ್ನ ಆಶ್ರಯವನ್ನು ಬಯಸುತ್ತಾರೋ ಮತ್ತು ಹಿಂಸೆಗೆ ಒಳಗಾಗುವವರನ್ನು ರಕ್ಷಿಸದ ಅಂತಹ ಆಡಳಿತಗಾರನು ವಿಷವನ್ನು ಪ್ರಾಶನ ಮಾಡಿ ಅಥವಾ ಬೆಂಕಿಯೊಳಗೆ ಪ್ರವೇಶಿಸಿ ಸಾಯುವುದು ಉತ್ತಮವಾದುದು.

ಆರ್ದ್ರೋತ್ಸವವನ್ನು ಜನವರಿ 06, 2023 ರ ಮುಂಜಾನೆ ಆಚರಿಸಲಾಯಿತು. ಈ ಸಂದರ್ಭದಲ್ಲಿ ಜಗದ್ಗುರು ಶ್ರೀ ಶ್ರೀ ವಿಧುಶೇಖರ ಭಾರತೀ ಸನ್ನಿಧಾನಂಗಳವರು ಶ್ರೀ ಮಲಹಾನಿಕರೇಶ್ವರ ಸ್ವಾಮಿ ದೇವಸ್ಥಾನದಲ್ಲಿ ಉಪತಸ್ಥಿತರಿದ್ದರು .

## ಜಗದ್ಗುರು ವಾಣಿ

(An Unit of the e magazine Voice of Jagadguru)

### ಅಪರೋಕ್ಷಾನುಭೂತಿ

अहंशब्देन विख्यात एक एव स्थितः परः ।

स्थूलस्त्वनेकतां प्राप्तः कथं स्याद्देहकः पुमान् ॥ ३१॥

ಅಹಂಶಬ್ದೇನ ವಿಖ್ಯಾತ ಏಕ ಏವ ಸ್ಥಿತಃ ಪರಃ ।

ಸ್ಥೂಲಸ್ತ್ವನೇಕತಾಂ ಪ್ರಾಪ್ತಃ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೧॥

"ನಾನು" (ಅಹಂಕಾರ) ಎಂದು ಕರೆಯಲ್ಪಡುವ ಪರಮ (ಪುರುಷ) ಕೇವಲ ಒಂದು, ಆದರೆ ಸ್ಥೂಲ ದೇಹಗಳು ಹಲವು. ಹಾಗಾದರೆ, ಈ ದೇಹವು ಪುರುಷ ಎಂದು ಆಗುವುದು ಹೇಗೆ?

अहं द्रष्टृतया सिद्धो देहो दृश्यतया स्थितः ।

ममायमिति निर्देशात्कथं स्याद्देहकः पुमान् ॥ ३२॥

ಅಹಂ ದ್ರಷ್ಟೃತಯಾ ಸಿದ್ಧೋ ದೇಹೋ ದೃಶ್ಯತಯಾ ಸ್ಥಿತಃ ।

ಮಮಾಯಮಿತಿ ನಿರ್ದೇಶಾತ್ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೨॥

"ನಾನು" ಎಂಬುದು(ಅಹಂ) ಗ್ರಹಿಕೆಯ ವಿಷಯವಾಗಿ ಉತ್ತಮವಾಗಿ ಸ್ಥಾಪಿತವಾಗಿದೆ. ಆದರೆ, ದೇಹವು ವಸ್ತುವಾಗಿದೆ. ನಾವು ದೇಹದ ಬಗ್ಗೆ ಮಾತನಾಡುವಾಗ, "ಇದು ನನ್ನದು" ಎಂದು ಹೇಳುವ ಸತ್ಯದಿಂದ ಇದು ತಿಳಿಯುತ್ತದೆ. ಹಾಗಾದರೆ ಈ ದೇಹವು ಪುರುಷ ಎಂದು ಆಗುವುದು ಹೇಗೆ?




अहं विकारहीनस्तु देहो नित्यं विकारवान् ।

इति प्रतीयते साक्षात्कथं स्याद्देहकः पुमान् ॥ ३३॥

ಅಹಂ ವಿಕಾರಹೀನಸ್ತು ದೇಹೋ ನಿತ್ಯಂ ವಿಕಾರವಾನ್ ।

ಇತಿ ಪ್ರತೀಯತೇ ಸಾಕ್ಷಾತ್ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೩॥

"ನಾನು" (ಆತ್ಮನ್) ಯಾವುದೇ ಬದಲಾವಣೆಯಿಲ್ಲದೆ, ಆದರೆ ದೇಹವು ಯಾವಾಗಲೂ ಬದಲಾವಣೆಗಳಿಗೆ ಒಳಗಾಗುತ್ತದೆ ಎಂಬುದು ನೇರ ಅನುಭವದ ಸತ್ಯ. ಹಾಗಾದರೆ ಈ ದೇಹವು ಪುರುಷ ಎಂದು ಆಗುವುದು ಹೇಗೆ?

(ಅಕ್ಟೋಬರ್ 22, 2024 ಬೆಂಗಳೂರಿನಲ್ಲಿ, ಜಗದ್ಗುರು ಶಂಕರಾಚಾರ್ಯ ಪರಮಪೂಜ್ಯ ಶ್ರೀ ಸನ್ನಿಧಾನಂ ಶ್ರೀ ವಿಧುಶೇಖರ ಭಾರತೀ ಮಹಾಸ್ವಾಮಿಗಳು)

(ಮುಂದುವರಿಯುತ್ತದೆ...)

# ಜಗದ್ಗುರು ವಾಣಿ

(An Unit of the e magazine Voice of Jagadguru)

## ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮೀಜಿಯವರ ಬೋಧನೆಗಳು.

★ ಒಬ್ಬ ವ್ಯಕ್ತಿಯು ಮುತ್ತು ಎಂದು ರತ್ನವನ್ನು ತಿಳಿದಾಗ ಅದನ್ನು ಬೆಳ್ಳಿ ಎಂದು ತಪ್ಪಾಗಿ ಭಾವಿಸಲು ಸಾಧ್ಯವಿಲ್ಲ. ಅದೇ ರೀತಿ, ಸರಿಯಾದ ಜ್ಞಾನವಿದ್ದಾಗ, ತಪ್ಪು ಕಲ್ಪನೆಗಳಿಗೆ ಅವಕಾಶವಿಲ್ಲ. ವಾಸ್ತವವಾಗಿ, ನಾವು ಮೊದಲಿಗಿಂತ ಕೆಟ್ಟವರಾಗಿದ್ದೇವೆ. ಬಹುತೇಕ ಎಲ್ಲರೂ ಚಡಪಡಿಕೆ, ಖಿನ್ನತೆ ಮತ್ತು ಅತೃಪ್ತಿಯ ಬಗ್ಗೆ ದೂರು ನೀಡುತ್ತಾರೆ. ಮದ್ಯ, ಮಾದಕ ದ್ರವ್ಯಗಳು ಮತ್ತು ಆತ್ಮಹತ್ಯೆಗಳು ಹೆಚ್ಚುತ್ತಿವೆ. ನಾವು ಮೊದಲಿಗಿಂತ ಹೆಚ್ಚು ಅತೃಪ್ತರಾಗಿದ್ದೇವೆ.

★ ಧರ್ಮವೇ ಸಂತೋಷಕ್ಕೆ ಕಾರಣ. ಇಂದು, ನಮ್ಮ ಪೂರ್ವಜರಂತೆ ನಮಗೆ ಮಾನಸಿಕ ಶಾಂತಿ ಮತ್ತು ಸಂತೋಷವಿಲ್ಲದಿದಿರುವುದಕ್ಕೆ ಕಾರಣ, ಧರ್ಮದ ಆಚರಣೆಯ ವಿಷಯದಲ್ಲಿ ನಾವು ಮಾಡಿರುವ ನಿರ್ಲಕ್ಷ್ಯೇ ಕಾರಣವಾಗಿದೆ. ಧರ್ಮದ ಆಚರಣೆ ಕಡಿಮೆಯಾದಾಗ, ದುಃಖವು ಪ್ರಾರಂಭವಾಯಿತು.

★ ನಿಮ್ಮ ದುಃಖಕ್ಕೆ ಸಮಯವನ್ನು ದೂಷಿಸಬೇಡಿ. ಕೆಟ್ಟ ದಿನಗಳು ಎಂದು ಕರೆಯಲ್ಪಡುವವು ನಾವೇ ಸೃಷ್ಟಿಸಿಕೊಂಡವು. ನಮ್ಮ ಪ್ರಸ್ತುತ ಎಲ್ಲಾ ದುಃಖಗಳು ಧರ್ಮದ ಬಗ್ಗೆ ನಮ್ಮದೇ ಆದ ನಿರ್ಲಕ್ಷ್ಯದಿಂದಾಗಿವೆ. ನಾವು ಯಾವುದೇ ಕ್ಷಣದಲ್ಲಿ, ನಮ್ಮ ಪೂರ್ವಜರ ಸರಳ ನಂಬಿಕೆ ಮತ್ತು ನೇರ ನಡವಳಿಕೆ, ಧಾರ್ಮಿಕ ಉತ್ಸಾಹ ಮತ್ತು ಶಾಂತಿಯುತ ಸಂತೃಪ್ತಿಗೆ ಮರಳುವ ಮೂಲಕ ದುಃಖವನ್ನು ಕೊನೆಗೊಳಿಸಬಹುದು.

★ ಜೀವನದ ನಿಜವಾದ ಆದರ್ಶದಿಂದ ನಿಮ್ಮ ಪತನದ ಆಳವನ್ನು ಅರಿತುಕೊಳ್ಳಿ ಮತ್ತು ಅದನ್ನು ಮರಳಿ ಪಡೆಯಲು ಪ್ರಾಮಾಣಿಕ ಪ್ರಯತ್ನ ಮಾಡಿ. ಧರ್ಮವು ಮನುಷ್ಯನನ್ನು ಅತ್ಯಂತ ಶ್ರೀಮಂತನಿಗಿಂತ ಶ್ರೀಮಂತನನ್ನಾಗಿ ಮಾಡುತ್ತದೆ, ಬಲಿಷ್ಠನಿಗಿಂತ ಬಲಶಾಲಿಯನ್ನಾಗಿ ಮಾಡುತ್ತದೆ, ಅತ್ಯಂತ ಸುಖಿಗಿಂತ ಸಂತೋಷಿಯನ್ನಾಗಿ ಮಾಡುತ್ತದೆ.

## ಜಗದ್ಗುರು ವಾಣಿ

(An Unit of the e magazine Voice of Jagadguru)

ನಮ್ಮ ವೆಬ್‌ಸೈಟ್ ಲಿಂಕ್: https://voiceofjagadguru.com/voj/

ಟೆಲಿಗ್ರಾಮ್ ಚಾನೆಲ್: https://t.me/voiceofjagadguru

ಇನ್ಸ್ಟಾಗ್ರಾಂ ಚಾನಲ್:
https://www.instagram.com/stories/voice_of_jagadguru_voj/3601249542534134684?igsh=MW90YW13N2c5b2hqaA==

ವಾಟ್ಸ ಆಪ್ ಸಮುದಾಯ ಚಾನೆಲ್: https://chat.whatsapp.com/Ly4wlaTu8Kc3sjjEYU8KGu

ಯೂಟ್ಯೂಬ್ ಚಾನಲ್: https://youtube.com/@jagad-guru-channel?si=brkLFqiz8sZJ6Ul

ಫೇಸ್ಬುಕ್ ಲಿಂಕ್: https://www.facebook.com/share/1Du5xkve4e/

ನಮ್ಮ ಸಂಪರ್ಕ ವಿಳಾಸ: Info@voiceofjagadguru.com